## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 756

ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನ ಕುಮಾರ್

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ವಾಯು ಮಾಲಿನ್ಯ ತಡೆಗಟ್ಟುವ ದೃಷ್ಟಿಯಿಂದ ಈ ಹಿಂದೆ ಎಲೆಕ್ಟ್ರಿಕ್ ಬಸ್‌ಗಳನ್ನು ಕೆ.ಎಸ್.ಆರ್.ಟಿ.ಸಿ/ಬಿ.ಎಂ.ಟಿ.ಸಿಗೆ ಗುತ್ತಿಗೆ ಆಧಾರದ ಮೇಲೆ ಅಥವಾ ಖರೀದಿಗೆ ತೆಗೆದುಕೊಳ್ಳಲು ಸರ್ಕಾರ ತೀರ್ಮಾನ ಕೈಗೊಂಡಿದೆಯೇ; | ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಜಿ.ಸಿ.ಸಿ. ಆಧಾರದ ಮೇಲೆ ಕೇಂದ್ರ ಸರ್ಕಾರದ ಭಾರೀ ಕೈಗಾರಿಕಾ ಮಂತ್ರಾಲಯದಿಂದ ಫೇಮ್-2 ಯೋಜನೆಯಡಿಯಲ್ಲಿ ಕ.ರಾ.ರ.ಸಾ.ನಿಗಮಕ್ಕೆ 50 ಸಂಖ್ಯೆ 12 ಮೀ. ಹವಾನಿಯಂತ್ರಿತ ಎಲೆಕ್ಟ್ರಿಕ್ ಬಸ್ಸುಗಳು, ವಾ.ಕ.ರ.ಸಾ.ಸಂಸ್ಥೆಗೆ 50 ಎಲೆಕ್ಟ್ರಿಕ್ ವಾಹನಗಳನ್ನು ಹಾಗೂ ಬೆಂ.ಮ.ಸಾ.ಸಂಸ್ಥೆಗೆ 300 ಎಲೆಕ್ಟ್ರಿಕ್ ಬಸ್ಸುಗಳನ್ನು ಕಾರ್ಯಾಚರಣೆ ಮಾಡಲು ಮಂಜೂರಾತಿ ದೊರೆತಿದ್ದು, ಅದರಂತೆ ಟೆಂಡರ್ ಅಹ್ವಾನಿಸಲಾಗಿದೆ.<br><br>ಬೆಂ.ಮ.ಸಾ.ಸಂಸ್ಥೆಗೆ ಬೆಂಗಳೂರು ಸ್ಮಾರ್ಟ್ ಸಿಟಿ ಲಿ. ಯೋಜನೆಯಡಿಯಲ್ಲಿ 90 ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲು ಕ್ರಮ ಕೈಗೊಳ್ಳುತ್ತಿರುತ್ತದೆ. |
| ಆ. | ಹಾಗಿದ್ದಲ್ಲಿ, ಈ ಪ್ರಸ್ತಾವನೆ ಯಾವ ಹಂತದಲ್ಲಿದೆ; ವಿಳಂಬವಾಗಲು ಕಾರಣಗಳೇನು; | <u>ಕ.ರಾ.ರ.ಸಾ.ನಿಗಮ ಮತ್ತು ವಾ.ಕ.ರ.ಸಾ.ಸಂಸ್ಥೆ:</u> ಕೆ.ಟಿ.ಪಿ.ಪಿ ನಿಯಮಾನುಸಾರ, ಟೆಂಡರ್‌ನ್ನು ಆಹ್ವಾನಿಸಲಾಗಿತ್ತು. ಸದರಿ ಟೆಂಡರ್‌ನಲ್ಲಿ ಮೆ: ಇವಿ ಟ್ರಾನ್ಸ್ ಪ್ರೈ. ಲಿ. ಹೈದರಾಬಾದ್ ಇವರು ಮಾತ್ರ ಟೆಂಡರ್‌ನ ಪೂರ್ವಾರ್ಹತೆ ನಿಯಮದಂತೆ ಅರ್ಹಗೊಂಡಿದ್ದು, ಸದರಿ ಕಂಪನಿಯು ಟೆಂಡರ್‌ನಲ್ಲಿ ನಮೂದಿಸಿದ ಒಟ್ಟು ವೆಚ್ಚ ಒಪ್ಪಂದದ (ಜಿ.ಸಿ.ಸಿ) ದರವು ಹೆಚ್ಚಾಗಿದ್ದ ಕಾರಣ, ಹೆಚ್ಚಿನ ಕಂಪನಿಗಳು ಭಾಗವಹಿಸುವ ಸಾಧ್ಯತೆಗಳಿರುವ ಕಾರಣ ಸದರಿ ಟೆಂಡರ್‌ನ್ನು ರದ್ದುಪಡಿಸಿ, ಹೊಸದಾಗಿ ಟೆಂಡರ್ ಕರೆಯಲು ನಿರ್ಣಯಿಸಿರುತ್ತದೆ. ಕೇಂದ್ರ ಸರ್ಕಾರದ ಭಾರಿ ಕೈಗಾರಿಕಾ ಸಚಿವಾಲಯವು ಅರ್ಹ ಟೆಂಡರ್‌ದಾರರಿಗೆ ದಿನಾಂಕ: 31.12.2020ರೊಳಗಾಗಿ ಸರಬರಾಜು ಆದೇಶವನ್ನು ನೀಡಲು ಆದೇಶಿಸಿರುತ್ತದೆ.<br><br>ಆದ್ದರಿಂದ, ಟೆಂಡರ್‌ನಲ್ಲಿ ಹೆಚ್ಚಿನ ಕಂಪನಿಗಳು ಭಾಗವಹಿಸುವಂತೆ ಪೂರ್ವಾರ್ಹತೆ ನಿಯಮವನ್ನು ಸಡಿಲಿಸಿ 50 ಎಲೆಕ್ಟ್ರಿಕ್ ಬಸ್ಸುಗಳಿಗೆ ಅಲ್ಪಾವಧಿ ಟೆಂಡರ್ ಸಂಖ್ಯೆ: ಟಿ-123 ದಿನಾಂಕ: 12.03.2020 ಮತ್ತು ಸಂಖ್ಯೆ: ಟಿ-124, ದಿನಾಂಕ 16-03-2020ನ್ನು ಕೆ.ಟಿ.ಪಿ.ಪಿ ನಿಯಮದಂತೆ ಆಹ್ವಾನಿಸಿದ್ದು, ಟೆಂಡರ್‌ನ ಪೂರ್ವಾರ್ಹತೆ ಬಿಡ್ಡನ್ನು ತೆರೆಯಲಾಗಿದ್ದು ಮೆ: ಇ.ವಿ.ಟ್ರಾನ್ಸ್ ಪ್ರೈ.ಲಿ ಹೈದರಾಬಾದ್ ಇವರು ಬಿಡ್ಡನ್ನು ಸಲ್ಲಿಸಿರುತ್ತಾರೆ.<br><br>ಈ ಮಧ್ಯೆ, ಭಾರತ ಸರ್ಕಾರದ ಹಣಕಾಸು ಮಂತ್ರಾಲಯದಿಂದ ದಿನಾಂಕ: 23.07.2020 ರಂದು ಹೊರಡಿಸಿದ್ದು, ಸದರಿ ಆದೇಶವನ್ನು ಉಲ್ಲೇಖಿಸಿ ಆರ್ಥಿಕ ಇಲಾಖೆಯಿಂದ ದಿನಾಂಕ: 25.08.2020ರಂದು ಹೊರಡಿಸಿರುವ ಆದೇಶಗಳಲ್ಲಿ ಪ್ರಮುಖವಾಗಿ ಈ ಕೆಳಗಿನಂತೆ ನಿರ್ದೇಶನಗಳನ್ನು ನೀಡಲಾಗಿದೆ:<br><br>1. ರಾಷ್ಟ್ರೀಯ ಸುರಕ್ಷತೆಯೂ ಸೇರಿದಂತೆ ಭಾರತ ರಕ್ಷಣೆಗೆ ಸಂಬಂಧಿಸಿದಂತೆ ನಿರ್ದಿಷ್ಟ ವರ್ಗದ ದೇಶಗಳ ಬಿಡ್ಡುದಾರರನ್ನು ಖರೀದಿಯಲ್ಲಿ ನಿಯಂತ್ರಿಸುವ ಸಲುವಾಗಿ ಭಾರತದ ಆರ್ಥಿಕ ನಿಯಮಾವಳಿ-2017 ಕ್ಕೆ ತಿದ್ದುಪಡಿ ಮಾಡಲಾಗಿದೆ. |

2. ಭಾರತದೊಂದಿಗೆ ಭೂ ಗಡಿಯನ್ನು ಹಂಚಿಕೊಳ್ಳುವ ದೇಶಗಳಿಂದ ಯಾವುದೇ ಬಿಡ್ಡುರುಗಳು ಸಾಮಗ್ರಿ, ಸೇವೆ, ಸಮಾಲೋಚನಾ ಸೇವೆ, ಟರ್ನ್‌ಕಿ ಹಾಗೂ ಪಿ.ಪಿ.ಪಿ. ಯೋಜನೆಗಳು ಸೇರಿದಂತಹ ಟೆಂಡರುಗಳಲ್ಲಿ ಭಾಗವಹಿಸಲು ಸೂಕ್ತ ಪ್ರಾಧಿಕಾರದಿಂದ ನೋಂದಣಿ ಪತ್ರ ಪಡೆದಿದ್ದಲ್ಲಿ ಮಾತ್ರ ಅರ್ಹತೆಯನ್ನು ಹೊಂದಿರುತ್ತಾರೆ.

3. ಸದರಿ ಆದೇಶದ ಅನುಸಾರ ಕರ್ನಾಟಕ ರಾಜ್ಯದ ವ್ಯಾಪ್ತಿಯಲ್ಲಿ ಕೆ.ಟಿ.ಪಿ.ಪಿ. ಅಡಿಯಲ್ಲಿ ಆಹ್ವಾನಿಸಲಾಗುವ ಟೆಂಡರುಗಳಿಗೆ ಸದರಿ ದೇಶಗಳಿಂದ ಭಾಗವಹಿಸಲು ಇಚ್ಛಿಸುವ ಬಿಡ್ಡರುಗಳು ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ರವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ನೋಂದಣಿ ಪ್ರಾಧಿಕಾರದಿಂದ ಅರ್ಹತಾ ಪತ್ರ ಪಡೆದು ಭಾಗವಹಿಸತಕ್ಕದೆಂದು ನಿರ್ದೇಶನ ನೀಡಲಾಗಿದೆ.

ಸದರಿ ಟೆಂಡರ್‌ನಲ್ಲಿ ಭಾಗವಹಿಸಿರುವ ಬಿಡ್ಡುದಾರರು ಮೇಲ್ಕಾಣಿಸಿದ ಸರ್ಕಾರಿ ನಿರ್ದೇಶನಗಳನ್ವಯ ನೋಂದಣಿ ಪತ್ರ ಎಲ್ಲಾ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ನೊಂದಣಿ ಪತ್ರ ಹಾಗೂ ನಿಗಧಿತ ನಮೂನೆಯಲ್ಲಿ ಘೋಷಣಾ ಪತ್ರಗಳನ್ನು ಸಲ್ಲಿಸುವಂತೆ ಪತ್ರ ಬರೆಯಲಾಗಿದ್ದು, ಅವರು ತಾವುಗಳು ಭಾರತದಲ್ಲಿ ಸ್ಥಾಪಿತವಾಗಿ ನೋಂದಾಯಿಸಿಕೊಂಡಿರುವ ಕಂಪನಿಗಳೆಂದು ಹಾಗೂ ಭಾರತ ಸರ್ಕಾರದ ದಿನಾಂಕ:23/7/2020 ರ ಹಣಕಾಸು ಇಲಾಖೆಯ ಆದೇಶಗಳ ಅನುಸಾರ ನೀಡಿರುವ ವರ್ಗ ವ್ಯಾಪ್ತಿಯಲ್ಲಿ ಒಳಪಡುವುದಿಲ್ಲವೆಂದು, ಆದ್ದರಿಂದ ನೋಂದಣಿ ಪತ್ರದ ಅಗತ್ಯವಿಲ್ಲವೆಂದು ತಿಳಿಸುತ್ತಾ ಹಾಗೂ ನಿಗಧಿತ ನಮೂನೆಯಲ್ಲಿ ಪ್ರಮಾಣೀಕರಿಸುತ್ತಾ ಮೇಲ್ಕಂಡ ಟೆಂಡರ್‌ಗೆ ತಮ್ಮ ಅರ್ಹತೆಯನ್ನು ಪರಿಗಣಿಸಬೇಕೆಂದು ಕೋರಿರುತ್ತಾರೆ.

ಈ ಬಗ್ಗೆ ನಿಯಮಾನುಸಾರ ಪರಿಶೀಲಿಸಿ ಟೆಂಡರ್‌ನ್ನು ಅಂತಿಮಗೊಳಿಸಲಾಗುವುದು.

ಬೆಂ.ಮ.ಸಾ.ಸಂಸ್ಥೆಯು ಫೇಮ್-2 ಯೋಜನೆ ಅಡಿಯಲ್ಲಿ ಜಿಸಿಸಿ ಆಧಾರದ ಮೇಲೆ 300 ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲು ಎರಡು ಬಾರಿ ಟೆಂಡರ್ ಅನ್ನು ಆಹ್ವಾನಿಸಿದ್ದು, ವಿವರಗಳು ಈ ಕೆಳಕಂಡಂತೆ ಇರುತ್ತದೆ:

ಅ) ಕೆಟಿಪಿಪಿ ಕಾಯ್ದೆ ಅನ್ವಯ ಟೆಂಡರ್ ಸಂಖ್ಯೆ:ಟಿ-118 ದಿನಾಂಕ.18.09.2019 ಅನ್ನು ಆಹ್ವಾನಿಸಿದ್ದು, ಸದರಿ ಟೆಂಡರ್‌ನಲ್ಲಿ ಬಿಡ್ಡುದಾರರು ರೂ.69.93 ಅಂತಿಮ ದರ ನೀಡಿರುತ್ತಾರೆ. ಪ್ರತಿ ಕಿ.ಮೀನ ಗಳಿಕೆಗಿಂತ ಪ್ರತಿ ಕಿ.ಮೀ.ನ ವೆಚ್ಚವು ಅಧಿಕವಾಗಿರುವುದರಿಂದ ಟೆಂಡರ್ ಅನ್ನು ರದ್ದುಗೊಳಿಸಲಾಗಿರುತ್ತದೆ.

ಆ) ಕೆಟಿಪಿಪಿ ಕಾಯ್ದೆ ಅನ್ವಯ ಟೆಂಡರ್ ಸಂಖ್ಯೆ: ಟಿ-121 ದಿ:23.01.2020 ಅನ್ನು ಆಹ್ವಾನಿಸಿದ್ದು, ಸದರಿ ಟೆಂಡರ್‌ನಲ್ಲಿ ಓರ್ವ ಬಿಡ್ಡುದಾರರು ಮಾತ್ರ ಭಾಗವಹಿಸಿದ್ದರಿಂದ ಟೆಂಡರ್ ಅನ್ನು ರದ್ದುಗೊಳಿಸಲಾಗಿರುತ್ತದೆ. ಮುಂದುವರೆದು, ಭಾರಿ ಕೈಗಾರಿಕಾ ಇಲಾಖೆಯು ಫೇಮ್-2 ಯೋಜನೆ ಅಡಿಯಲ್ಲಿ ಪ್ರತಿ ಬಸ್ಸಿಗೆ ನೀಡುವ ಪ್ರೋತ್ಸಾಹ ಧನವನ್ನು ಜಿಸಿಸಿ ಆಧಾರದ ಮೇಲೆ 300 ಹವಾನಿಯಂತ್ರಣ ರಹಿತ ಎಲೆಕ್ಟ್ರಿಕ್ ಬಸ್ಸುಗಳನ್ನು ಫೇಮ್-2 ಯೋಜನೆ ಅಡಿಯಲ್ಲಿ ಆಚರಣೆ ಮಾಡಲು ಹೊಸ ಟೆಂಡರ್ ಅನ್ನು ಆಹ್ವಾನಿಸಲು ಪರಿಶೀಲಿಸಲಾಗುತ್ತಿದೆ.

2. ಬೆಂಗಳೂರು ಸ್ಮಾರ್ಟ್ ಸಿಟಿ ಲಿ., ಯೋಜನೆಯಡಿಯಲ್ಲಿ 90 ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲು ಈಗಾಗಲೆ ಟೆಂಡರ್ ಅನ್ನು ಆಹ್ವಾನಿಸಲಾಗಿದ್ದು, ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.

| | | |
|---|---|---|
| ಇ. | ಎಲೆಕ್ಟ್ರಿಕ್ ಬಸ್‌ಗಳಿಗೆ ಕೇಂದ್ರ ಸರ್ಕಾರ ಸಹಾಯಧನ ನೀಡಿದ್ದರೂ ಸಹ ಈ ಯೋಜನೆಯನ್ನು ಬಳಸಿಕೊಳ್ಳದೆ ವಿಳಂಬ ಧೋರಣೆಯಿಂದ ಕೇಂದ್ರ ಸರ್ಕಾರದ ಸಹಾಯಧನ ನಿಂತುಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇಂದ್ರ ಸರ್ಕಾರದಿಂದ ಇದುವರೆವಿಗೂ ಫೇಮ್-2 ಯೋಜನೆ ಅಡಿಯಲ್ಲಿ ಕ.ರಾ.ರ.ಸಾ.ನಿಗಮ ಮತ್ತು ವಾ.ಕ.ರ.ಸಾ.ಸಂಸ್ಥೆಗೆ ಯಾವುದೇ ಸಹಾಯಧನ ಮಂಜೂರಾಗಿರುವುದಿಲ್ಲ.<br><br>ಬೆಂ.ಮ.ಸಾ.ಸಂಸ್ಥೆಗೆ ಫೇಮ್-2 ಯೋಜನೆಯಡಿಯಲ್ಲಿ 300 ಹವಾನಿಯಂತ್ರಿತ ಬಸ್ಸುಗಳನ್ನು ಆಚರಣೆ ಮಾಡಲು ಆಹ್ವಾನಿಸಿದ್ದ ಟೆಂಡರ್‌ನಲ್ಲಿ ಓರ್ವ ಬಿಡ್ಡುದಾರರು ಮಾತ್ರ ಬಿಡ್ ಸಲ್ಲಿಸಿದ್ದರಿಂದ ಹಾಗೂ ಕೋವಿಡ್-19 ಸಾಂಕ್ರಾಮಿಕ ರೋಗವನ್ನು ಹರಡುವಿಕೆಯಿಂದ ಹವಾನಿಯಂತ್ರಿತ ಬಸ್ಸುಗಳ ಆಚರಣೆಗೆ ಆಹ್ವಾನಿಸಲಾಗಿದ್ದ ಟೆಂಡರ್ ಅನ್ನು ರದ್ದುಗೊಳಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲು ಆಗಿರುವ ತೊಂದರೆಗಳನ್ನು ವಿವರಿಸುತ್ತಾ ಫೇಮ್-2 ಯೋಜನೆಯಡಿಯಲ್ಲಿನ ಸಹಾಯಧನವನ್ನು ಉಪಯೋಗಿಸಿಕೊಳ್ಳಲು ಸಂಸ್ಥೆಯು ದಿನಾಂಕ: 11.05.2020ರಂದು ಭಾರಿ ಕೈಗಾರಿಕಾ ಇಲಾಖೆಗೆ ಬಿಡ್ಡುದಾರರಿಗೆ ಸರಬರಾಜು ಆದೇಶವನ್ನು ನೀಡುವ ದಿನಾಂಕವನ್ನು ವಿಸ್ತರಿಸಲು ಕೋರಿದ್ದು, ಅದರಂತೆ, ಭಾರಿ ಕೈಗಾರಿಕಾ ಇಲಾಖೆಯು ದಿನಾಂಕ: 31.12.2020ರವರೆಗೆ ವಿಸ್ತರಿಸಿರುತ್ತಾರೆ.<br><br>ಫೇಮ್-2 ಯೋಜನೆ ಅಡಿಯಲ್ಲಿ ಮಂಜೂರಾದ 300 ಎಲೆಕ್ಟ್ರಿಕ್ ಬಸ್ಸುಗಳ ಸಂಖ್ಯೆಯನ್ನು ಕಡಿಮೆಗೊಳಿಸಿ ಪ್ರತಿ ಬಸ್ಸಿಗೆ ನೀಡುವ ಪ್ರೋತ್ಸಾಹಧನ ರೂ.55.00 ಲಕ್ಷವನ್ನು ಹೆಚ್ಚಿಸುವಂತೆ ಕೇಂದ್ರ ಸರ್ಕಾರವನ್ನು ಕೋರಲಾಗಿದೆ.<br><br>ಈ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರದ ಸಹಾಯಧನ ಬಳಸಿಕೊಳ್ಳುವುದರಲ್ಲಿ ವಿಳಂಬವಾಗಿರುವುದಿಲ್ಲ. |
| ಈ. | ಈ ವಿಳಂಬ ಧೋರಣೆಗೆ ಕಾರಣರಾದ ಅಧಿಕಾರಿಗಳು ಯಾರು; ಆ ಅಧಿಕಾರಿಗಳ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು? | ಉಪ ಪ್ರಶ್ನೆ-ಇ ರಲ್ಲಿ ವಿವರಿಸಿರುವಂತೆ ವಿಳಂಬವಾಗಿರುವುದಿಲ್ಲ. |

ಸಂಖ್ಯೆ: ಟಿಡಿ 170 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು